





**(ಅವತೀರ್ಣ - ಮಕ್ಕಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ — بِسۡمِ اللّٰہِ الرَّحۡمٰنِ الرَّحِیۡمِ ○

1. ಆಕಾಶವು ಸಿಡಿದು ಹೋಗುವಾಗ- — اِذَا السَّمَآءُ انۡشَقَّتۡ ۙ﴿۱﴾

2. ಮತ್ತು ತನ್ನ ಪ್ರಭುವಿನ ಆದೇಶವನ್ನು ಪಾಲಿಸುವಾಗ, ಅದುವೇ (ಆಜ್ಞಾಪಾಲನೆಯೇ) ಅದರ ಪಾಲಿನ ಸಹಜ ಬಾಧ್ಯತೆಯಾಗಿದೆ- — وَ اَذِنَتۡ لِرَبِّہَا وَ حُقَّتۡ ۙ﴿۲﴾

3. ಭೂಮಿಯು ಹರಡಲ್ಪಡುವಾಗ,[1] — وَ اِذَا الۡاَرۡضُ مُدَّتۡ ۙ﴿۳﴾

4. ಅದು ತನ್ನೊಳಗೆ ಇರುವ ಸಕಲವನ್ನೂ ಹೊರಗೆಸೆದು ಬರಿದಾಗಿ ಬಿಡುವಾಗ,[2] — وَ اَلۡقَتۡ مَا فِیۡہَا وَ تَخَلَّتۡ ۙ﴿۴﴾

5. ಅದು ತನ್ನ ಪ್ರಭುವಿನ ಆದೇಶವನ್ನು ಪಾಲಿಸುವಾಗ, ಅದುವೇ (ಆಜ್ಞಾಪಾಲನೆಯೇ) ಅದರ ಸಹಜ ಬಾಧ್ಯತೆಯಾಗಿದೆ. — وَ اَذِنَتۡ لِرَبِّہَا وَ حُقَّتۡ ؕ﴿۵﴾

6. ಓ ಮಾನವ! ನೀನು ಮೆಲ್ಲಮೆಲ್ಲನೆ ನಿನ್ನ ಪ್ರಭುವಿನ ಕಡೆಗೆ ಸಾಗುತ್ತಿರುವೆ ಮತ್ತು ಅವನನ್ನು ಭೇಟಿಯಾಗಲಿರುವೆ. — یٰۤاَیُّہَا الۡاِنۡسَانُ اِنَّکَ کَادِحٌ اِلٰی رَبِّکَ کَدۡحًا فَمُلٰقِیۡہِ ۚ﴿۶﴾

7. ಅನಂತರ ಯಾರ ಕರ್ಮಪತ್ರವು ಅವನ ಬಲಗೈಯಲ್ಲಿ ಕೊಡಲ್ಪಡುವುದೋ- — فَاَمَّا مَنۡ اُوۡتِیَ کِتٰبَہٗ بِیَمِیۡنِہٖ ۙ﴿۷﴾

8. ಅವನಿಂದ ಲಘುವಾಗಿ ಲೆಕ್ಕಾಚಾರ ಪಡೆಯಲಾಗುವುದು-[3] — فَسَوۡفَ یُحَاسَبُ حِسَابًا یَّسِیۡرًا ۙ﴿۸﴾

---

1. ಭೂಮಿಯನ್ನು ಹರಡಲಾಗುವುದೆಂದರೆ ನದಿ ಮತ್ತು ಸಮುದ್ರಗಳನ್ನು ಮುಚ್ಚಿ ಬಿಡಲಾಗುವುದು. ಪರ್ವತಗಳನ್ನು ಛಿದ್ರವಿಚ್ಛಿದ್ರಗೊಳಿಸಿ ಹರಡಿ ಬಿಡಲಾಗುವುದು. ಭೂಮಿಯ ಏರು-ತಗ್ಗುಗಳನ್ನೆಲ್ಲಾ ಸಮತಟ್ಟುಗೊಳಿಸಿ ವಿಶಾಲ ಮೈದಾನದಂತೆ ಮಾಡಲಾಗುವುದು.
2. ಅರ್ಥಾತ್- ಅದರೊಳಗಿನ ಮೃತ ಮಾನವರೆಲ್ಲರನ್ನೂ ಅದು ತೆಗೆದು ಹೊರಹಾಕುವುದು. ಅಲ್ಲದೆ ಅದರೊಳಗಿರುವ ಅವರ ಕರ್ಮಗಳ ಸಾಕ್ಷ್ಯಾಧಾರಗಳನ್ನೂ ಸಂಪೂರ್ಣವಾಗಿ ಹೊರಹಾಕಲಾಗುವುದು. ಯಾವುದೂ ಅದರೊಳಗೆ ಹೂತುಹೋಗಿ ಗುಪ್ತವಾಗಿ ಉಳಿಯಲಾರದು.
3. ಅರ್ಥಾತ್- ಅವರ ಉಗ್ರ ವಿಚಾರಣೆ ನಡೆಸಲಾಗುವುದಿಲ್ಲ. ಇಂತಿಂತಹ ಕೆಲಸಗಳನ್ನು ನೀನು ಯಾಕೆ ಮಾಡಿದೆ. ಈ ಕೆಲಸಗಳಿಗೆ ನಿಮ್ಮ ಬಳಿ ಯಾವ ನೆಪಗಳಿವೆ ಎಂದು ಅವರೊಡನೆ ಕೇಳಲಾಗುವುದಿಲ್ಲ. ಅವರ ಕರ್ಮಪಟ್ಟಿಯಲ್ಲಿ ಒಳಿತುಗಳ ಜತೆ ಕೆಡುಕುಗಳೂ ಖಂಡಿತ

9. ಮತ್ತು ಅವನು ತನ್ನವರ ಕಡೆಗೆ ಪರಮಾನಂದದೊಂದಿಗೆ ಮರಳುವನು.[4]
وَّيَنْقَلِبُ اِلٰۤى اَهْلِهٖ مَسْرُوْرًا ﴿٩﴾

10. ಇನ್ನು ಯಾರ ಕರ್ಮಪತ್ರವನ್ನು ಅವನ ಬೆನ್ನ ಹಿಂದಿನಿಂದ ಕೊಡಲಾಗುವುದೋ-[5]
وَاَمَّا مَنْ اُوْتِىَ كِتٰبَهٗ وَرَآءَ ظَهْرِهٖ ﴿١٠﴾

11. ಅವನು ಮೃತ್ಯುವನ್ನು ಕೂಗಿ ಕರೆಯುವನು-
فَسَوْفَ يَدْعُوْا ثُبُوْرًا ﴿١١﴾

12. ಮತ್ತು ಧಗಧಗಿಸುವ ನರಕಾಗ್ನಿಯಲ್ಲಿ ಬೀಳುವನು.
وَّيَصْلٰى سَعِيْرًا ﴿١٢﴾

13. ಅವನು ತನ್ನ ಮನೆಯವರೊಂದಿಗೆ ತಲ್ಲೀನನಾಗಿದ್ದನು.
اِنَّهٗ كَانَ فِىْۤ اَهْلِهٖ مَسْرُوْرًا ﴿١٣﴾

14. ತನಗೆ ಎಂದೂ ಮರಳಲಿಕ್ಕಿಲ್ಲವೆಂದು ಅವನು ಗ್ರಹಿಸಿದ್ದನು.
اِنَّهٗ ظَنَّ اَنْ لَّنْ يَّحُوْرَ ﴿١٤﴾

15. ಮರಳಲಿಕ್ಕಿಲ್ಲವೇಕೆ? ಅವನ ಪ್ರಭು ಅವನ ಕೃತ್ಯಗಳನ್ನು ನೋಡುತ್ತಲಿದ್ದನು.
بَلٰۤى ۚ اِنَّ رَبَّهٗ كَانَ بِهٖ بَصِيْرًا ﴿١٥﴾

16. ಖಂಡಿತ ಅಲ್ಲ! ನಾನು ಆಣೆ ಹಾಕುತ್ತೇನೆ ಸಂಜೆಯ ಕೆಂಬಣ್ಣದ,
فَلَاۤ اُقْسِمُ بِالشَّفَقِ ﴿١٦﴾

17. ರಾತ್ರಿಯ ಹಾಗೂ ಅದು ಬಾಚಿಕೊಳ್ಳುವವುಗಳ-
وَالَّيْلِ وَمَا وَسَقَ ﴿١٧﴾

18. ಮತ್ತು ಚಂದ್ರನ- ಅದು ಪೂರ್ಣಚಂದ್ರವಾಗುವಾಗ-
وَالْقَمَرِ اِذَا اتَّسَقَ ﴿١٨﴾

19. ನಿಮಗೆ ಖಂಡಿತವಾಗಿಯೂ ಹಂತ ಹಂತವಾಗಿ ಒಂದು ಅವಸ್ಥೆಯಿಂದ ಇನ್ನೊಂದು ಅವಸ್ಥೆಯ ಕಡೆಗೆ ಹಾದು ಹೋಗುತ್ತಲೇ ಇರಬೇಕಾಗಿದೆ.[6]
لَتَرْكَبُنَّ طَبَقًا عَنْ طَبَقٍ ﴿١٩﴾

---

ಇರುವುವು. ಆದರೆ ಒಳಿತುಗಳ ತಟ್ಟೆ ಕೆಡುಕುಗಳಿಗಿಂತ ಭಾರವಾಗಿರುವುದನ್ನು ಕಂಡು ಅವರ ತಪ್ಪುಗಳನ್ನು ಕಡೆಗಣಿಸಲಾಗುವುದು ಮತ್ತು ಅವರನ್ನು ಕ್ಷಮಿಸಲಾಗುವುದು.

4. ತನ್ನವರು ಎಂದರೆ ತಮ್ಮಂತೆಯೇ ಕ್ಷಮಿಸಲ್ಪಟ್ಟ ಕುಟುಂಬಸ್ಥರು, ಮಡದಿ ಮಕ್ಕಳು ಮತ್ತು ಸಂಗಾತಿಗಳು.

5. ಅಲ್‌ಹಾಕ್ಕ ಅಧ್ಯಾಯದಲ್ಲಿ "ಯಾರ ಕರ್ಮಪಟ್ಟಿಯನ್ನು ಎಡಗೈಯಲ್ಲಿ ನೀಡಲಾಗುವುದೋ" ಎಂದು ಹೇಳಲಾಗಿದೆ. ಇಲ್ಲಿ "ಅದನ್ನು ಬೆನ್ನ ಹಿಂದಿನಿಂದ ನೀಡಲಾಗುವುದು" ಎನ್ನಲಾಗಿದೆ. ಪ್ರಾಯಶಃ ಇದರ ಸ್ವರೂಪ ಹೀಗಿರಬಹುದು. ಸಮಸ್ತ ಸೃಷ್ಟಿಗಳ ಮುಂದೆ ಕರ್ಮಪಟ್ಟಿಯನ್ನು ಸ್ವೀಕರಿಸಲು ಸಂಕೋಚವಾಗಿ ಅವನು ತನ್ನ ಕೈಯನ್ನು ಹಿಂದಕ್ಕೆ ಸರಿಸುವನು. ಆದರೆ ಅವನು ಕೈಯನ್ನು ಮುಂದುಮಾಡಿದರೂ ಬೆನ್ನ ಹಿಂದಕ್ಕೆ ಸರಿಸಿದರೂ ಕರ್ಮಪಟ್ಟಿನ್ನಂತೂ ಅವನ ಕೈಯಲ್ಲಿ ಹಿಡಿಸಲಾಗುವುದು.

6. ಅರ್ಥಾತ್- ನೀವು ಒಂದೇ ಸ್ಥಿತಿಯಲ್ಲಿರಬೇಕಾದವರಲ್ಲ. ಯೌವನದಿಂದ ವೃದ್ಧಾಪ್ಯ, ವೃದ್ಧಾಪ್ಯದಿಂದ ಮರಣ, ಮರಣದಿಂದ ಬರ್ಝಕ್(ಆತ್ಮಗಳ ಲೋಕ), ಬರ್ಝಕ್‌ನಿಂದ ಮರಣೋತ್ತರ ಜೀವನ, ಮರಣೋತ್ತರ ಜೀವನದಿಂದ ಹಶ್ರ್‌ನ ಮೈದಾನ, ಅನಂತರ ವಿಚಾರಣೆ ಮತ್ತು ಶಿಕ್ಷೆ-ರಕ್ಷೆ ಹೀಗೆ ಹಲವು ಮಜಲುಗಳನ್ನು ನೀವು ಕಡ್ಡಾಯವಾಗಿ ದಾಟಬೇಕಾಗಿದೆ. ಇದಕ್ಕೆ ಮೂರು ವಿಷಯಗಳ ಆಣೆ ಹಾಕಲಾಗಿದೆ. 1) ಸೂರ್ಯಾಸ್ತಮಾನದ ಬಳಿಕ ಇರುವ ದಿಗಂತದ ಕೆಂಬಣ್ಣ. 2) ದಿನದ ನಂತರ ರಾತ್ರಿಯ ಕಾರ್ಗತ್ತಲೆ, ಅದರಲ್ಲಿ

20. ಆದರೂ ಇವರು ವಿಶ್ವಾಸವಿರಿಸದಿರಲು ಇವರಿಗೆ ಏನಾಗಿದೆ?

فَمَا لَهُمْ لَا يُؤْمِنُونَ ۝٢٠

21. ಇವರ ಮುಂದೆ ಕುರ್‌ಆನನ್ನು ಪಠಿಸಲಾದಾಗ ಇವರು ಸಾಷ್ಟಾಂಗ ವೆರಗುವುದಿಲ್ಲವೇಕೆ?

وَإِذَا قُرِئَ عَلَيْهِمُ الْقُرْآنُ لَا يَسْجُدُونَ ۩ ۝٢١

22. ನಿಜವಾಗಿ ಈ ಸತ್ಯನಿಷೇಧಿಗಳಂತು ಸುಳ್ಳಾಗಿಸುತ್ತಾರೆ.

بَلِ الَّذِينَ كَفَرُوا يُكَذِّبُونَ ۝٢٢

23. ವಸ್ತುತಃ ಇವರು (ತಮ್ಮ ಕರ್ಮಪತ್ರಗಳಲ್ಲಿ) ಏನನ್ನು ಸಂಗ್ರಹಿಸು ತ್ತಿದ್ದಾರೆಂಬುದನ್ನು ಅಲ್ಲಾಹನು ಚೆನ್ನಾಗಿ ಬಲ್ಲನು.[7]

وَاللَّهُ أَعْلَمُ بِمَا يُوعُونَ ۝٢٣

24. ಆದುದರಿಂದ ಇವರಿಗೆ ವೇದನಾಯುಕ್ತ ಯಾತನೆಯ ಸುವಾರ್ತೆ ಕೊಟ್ಟು ಬಿಡಿರಿ-

فَبَشِّرْهُمْ بِعَذَابٍ أَلِيمٍ ۝٢٤

25. ಆದರೆ ಸತ್ಯವಿಶ್ವಾಸ ಸ್ವೀಕಾರ ಮಾಡಿದವರಿಗೂ ಸತ್ಕರ್ಮವೆಸಗಿ ದವರಿಗೂ ಎಂದೆಂದಿಗೂ ಮುಗಿಯದಂತಹ ಸತ್ಫಲವಿದೆ.

إِلَّا الَّذِينَ آمَنُوا وَعَمِلُوا الصَّالِحَاتِ
لَهُمْ أَجْرٌ غَيْرُ مَمْنُونٍ ۝٢٥

---

ದಿನದ ವೇಳೆ ಭೂಮಿಯಲ್ಲಿ ಹರಡಿದ್ದ ಅನೇಕ ಮಾನವರು ಮತ್ತು ಪ್ರಾಣಿಗಳು ಮರಳಿ ನೆಲೆ ಸೇರುವುದು. 3) ಬಿದಿಗೆ ಚಂದ್ರ ಹಂತಹಂತವಾಗಿ ಬೆಳೆದು ಹುಣ್ಣಿಮೆಯ ಚಂದ್ರನಾಗುವುದು. ಮಾನವನು ವಾಸಿಸುವ ಈ ನಿಸರ್ಗದಲ್ಲಿ ಎಲ್ಲೂ ನಿಶ್ಚಲತೆಯಿಲ್ಲ. ನಿರಂತರವಾದ ಬದಲಾವಣೆ ಮತ್ತು ಹಂತಹಂತದ ವ್ಯತ್ಯಾಸದ ಪ್ರಕ್ರಿಯೆ ಎಲ್ಲಾ ಕಡೆಗಳಲ್ಲಿ ಕಂಡು ಬರುತ್ತದೆ ಎಂದು ಇವು ಬಹಿರಂಗವಾಗಿ ಸಾಕ್ಷ್ಯ ವಹಿಸುತ್ತಿವೆ. ಆದ್ದರಿಂದ ಮರಣದ ಕೊನೆಯುಸಿರಿನೊಂದಿಗೆ ಎಲ್ಲವೂ ಕೊನೆಗೊಳ್ಳುತ್ತದೆ ಎಂಬ ಸತ್ಯನಿಷೇಧಿಗಳ ಭಾವನೆ ಸರಿಯಲ್ಲ.

7. ಅವರು ತಮ್ಮ ಎದೆಯಲ್ಲಿ ತುಂಬಿಕೊಂಡಿರುವ ಸತ್ಯನಿಷೇಧ, ವಿದ್ವೇಷ, ಸತ್ಯದ್ವೇಷ, ದುಷ್ಟ ಸಂಕಲ್ಪ ಮತ್ತು ಕೆಟ್ಟ ಇರಾದೆಗಳ ಮಾಲಿನ್ಯವನ್ನು ಅಲ್ಲಾಹನು ಚೆನ್ನಾಗಿ ಬಲ್ಲವನಾಗಿದ್ದಾನೆ ಎಂಬುದು ಅದರ ಇನ್ನೊಂದು ಅರ್ಥವಾಗಿದೆ.